# ವಂಗಾರಿ ಮಥಾಯಿಯ ಆಶಾದಾಯಕ ಗಿಡಗಳ ಕತೆ

## ಆಫ್ರಿಕೆಯಲ್ಲಿಯ ಸತ್ಯ ಘಟನೆ

ಲೇಖಿಕೆಃ ಜಿಯಾನೆಟ ವಿಂಟರ      ಕನ್ನಡಕ್ಕೆ ಪ್ರಭಾಕರ ನಾನಾವಟಿ





ಭೂಮಿ ಬರಡಾಗಿತ್ತು.

ನನಗೆ ಅದನ್ನು ಮೊದಲಿದ್ದಂತೆ  ಹಸಿರಾಗಿ ಮಾಡಬೇಕಿತ್ತು.

- ವಂಗಾರಿ ಮಥಾಯಿ



ಆಫ್ರಿಕೆಯಲ್ಲಿಯ ಕೆನಿಯಾದ  ಅರಣ್ಯದಲ್ಲಿ  ಕೊಡೆಯಂತೆ ಹರಡಿದ ಮರಗಳ ಕೆಳಗೆ ಒಂದು ಗುಡಿಸಲಿನಲ್ಲಿ ವಂಗಾರಿ ಇರುತ್ತಿದ್ದಳು.



ಅವಳ ತಾಯಿ ಅಡವಿಯಲ್ಲಿ ಉರುವಲನ್ನು ತರಲಿಕ್ಕೆ ಹೋಗುವಾಗ ವಂಗಾರಿ ಕೂಡ ಅವಳ ಜತೆಗೆ ಹೋಗಿ ದಾರಿಯಲ್ಲಿ ಹಕ್ಕಿಗಳ ನಿರೀಕ್ಷಣೆ ಮಾಡುತ್ತಿದ್ದಳು.



ವಂಗಾರಿ ಕಬ್ಬು, ಗೋವಿನ ಜೋಳ ಮತ್ತು ಗೆಣಸನ್ನು ನೆಟ್ಟುವಾಗ, ಬೆಳೆಯನ್ನು ಕೊಯ್ಯುವಾಗ ತನ್ನ ತಾಯಿಗೆ ಹೊಲಗೆಲಸದಲ್ಲಿ ಸಹಾಯ ಮಾಡುತ್ತಿದ್ದಳು.



ವಂಗಾರಿ ತನ್ನ ಶಾಲೆಯಲ್ಲಿ ಮೊದಲನೆ ಕ್ರಮಾಂಕ ಪಡೆದು ಎಲ್ಲ ತರಗತಿಗಳಲ್ಲಿ ಉತ್ತೀರ್ಣಳಾಗುತ್ತಿದ್ದಳು. ಚಿಕ್ಕ ಗಿಡದಷ್ಟು ಅವಳು ಎತ್ತರವಾದಾಗ ಅಮೇರಿಕೆಯಲ್ಲಿಯ ಶಿಕ್ಷಣಕ್ಕಾಗಿ ಅವಳಿಗೆ ವಿದ್ಯಾರ್ಥಿವೇತನ ದೊರೆಯಿತು.



ಆರು ವರುಷಗಳ ಅಭ್ಯಾಸ ಪೂರ್ಣಗೊಳಿಸಿ ಅವಳು ಆಫ್ರಿಕೆಯಲ್ಲಿಯ ತನ್ನ ಮನೆಗೆ ಹಿಂದಿರುಗಿದಾಗ ಅಲ್ಲಿ ಸಾಕಷ್ಟು ಬದಲಾವಣೆಯಾದದ್ದು ಅವಳಿಗೆ ಕಂಡಿತು. *ಏನಾಯಿತು?* ಅವಳಿಗೆ ಅಚ್ಚರಿಯಾಯಿತು. *ಗಿಡಗಳೆಲ್ಲ ಎಲ್ಲಿ ಮಾಯವಾದವು ?*



ಊರಲ್ಲಿಯ ಹೆಂಗಸರಿಗೆಲ್ಲ ಉರುವಲನ್ನು ತರಲಿಕ್ಕೆ ಸಾಕಷ್ಟು ದೂರ ಹೋಗಬೇಕಾಗುತ್ತಿತ್ತು. ಬೆನ್ನಿನ ಮೇಲೆ ಕಟ್ಟಿಗೆಯನ್ನು ತರುವಾಗ ಬೆನ್ನು ಬಾಗುತ್ತಿತ್ತು. ಎಲ್ಲ ಕಡೆಯ ಭೂಮಿ ಬರಡಾಗಿತ್ತು. ಮರುಭೂಮಿಯಂತೆ ಕಾಣುತ್ತಿತ್ತು. *ಹಕ್ಕಿಗಳೆಲ್ಲ ಎಲ್ಲಿಗೆ ಹಾರಿ ಹೋದವು?*



ಹೊಸ ಕಟ್ಟಡಗಳನ್ನು ಕಟ್ಟಲಿಕ್ಕೆಂದು ಸಾವಿರಾರು ಮರಗಳನ್ನು ಕಡಿದು ಹಾಕಲಾಗಿತ್ತು. ಆದರೆ ಯಾರೂ ಹೊಸ ಗಿಡಗಳನ್ನು ನೆಟ್ಟುತ್ತಿರಲಿಲ್ಲ. *ಇಡೀ ಕೆನಿಯಾ ಮರುಭೂಮಿ ಯಾದರೆ ...* ಎಂಬ ಅಳುಕಿನಿಂದ ಅವಳ ಕಣ್ಣಲ್ಲಿ ನೀರು ತುಂಬಿದವು.



ವಂಗಾರಿ ಬರಡಾದ ನೆಲದ ಬಗ್ಗೆ ವಿಚಾರ ಮಾಡ-ತೊಡಗಿದಳು. *ನಾನು ನನ್ನ ಮನೆಯ ಹಿತ್ತಲಿನಲ್ಲಿ ಗಿಡವನ್ನು ನೆಟ್ಟುವೆ. ಒಮ್ಮೆ ಒಂದೇ ಗಿಡ.* ಹೀಗೆ ಅವಳು ಒಂಬತ್ತು ಸಸಿಗಳನ್ನು ನೆಟ್ಟಳು.



ಬೀಜಗಳಿಂದ ಸಸಿಯು ಹೊರಬರುವದನ್ನು ಕಂಡಾಗ ಇನ್ನಷ್ಟು ಗಿಡಗಳನ್ನು ನೆಟ್ಟಬೇಕೆಂದು ಹುರಿತುಂಬುವದು. ಹೀಗಾಗಿ ಆ ಬಯಲಲ್ಲಿ  ಒಂದು ಚಿಕ್ಕ ನರ್ಸರಿ  ಬೆಳೆದು ನಿಲ್ಲುವದು. ಸಾಲಾಗಿ ಸಸಿಗಳನ್ನು ಅಲ್ಲಿ ನೆಡಲಾಗುವದು.



ಆ ಮೇಲೆ ಆ ಹಳ್ಳಿಯಲ್ಲಿಯ ಎಲ್ಲ ಹೆಣ್ಣುಮಕ್ಕಳಿಗೆ ಗಿಡಗಳನ್ನು ಹಚ್ಚುವದರಿಂದ ಏನೇನು ಲಾಭಗಳು ಉಂಟಾಗುವವು ಎಂಬುದನ್ನು ತಿಳಿಸಿ ಹೇಳಿದಳು. ಭೆಟ್ಟಿಯಾದ ಪ್ರತಿಯೊಬ್ಬರಿಗೆ ಅವಳು ಒಂದು ಗಿಡದ ಸಸಿ ಕೊಡುತ್ತಿದ್ದಳು. *ಗಿಡ ಒಮ್ಮೆ ಬೆಳೆದು ನಿಂತರೆ ನಮ್ಮ ಬಾಳ್ವೆ ಸುಖಕರವಾಗುವದು. ಇದು ನಿಮಗೆ ಕೆಲ ದಿನಗಳಲ್ಲಿಯೇ ತಿಳಿದು ಬರುವದು. ನಾವು ಸುಖದ ಬೀಜಗಳನ್ನು ನೆಟ್ಟುತ್ತಿದ್ದೇವೆ.*



ಆ ಮೇಲೆ ಹೆಂಗಸರೆಲ್ಲ ಒಟ್ಟಾಗಿ ತಮ್ಮ ಹಳ್ಳಿಯಲ್ಲಿ ಸಾಲಾಗಿ ಸಸಿಗಳನ್ನು ನೆಟ್ಟರು.



ಕೆಲವೇ ದಿನಗಳಲ್ಲಿ ನೆಲದ ಮೇಲೆ ಹಸಿರು ಹಾಳೆಯನ್ನು ಹಾಸಿದಂತೆ ಸಸಿಗಳು ಕಾಣತೊಡಗಿದವು.



ವಂಗಾರಿ ಮತ್ತು ಅವಳ ಜತೆ ಕೆಲಸ ಮಾಡುವ ಹೆಣ್ಮಕ್ಕಳನ್ನು ನೋಡಿ ಅರಣ್ಯ ಖಾತೆಯಲ್ಲಿ ಕೆಲಸ ಮಾಡುತ್ತಿರುವ  ಪುರುಷರೆಲ್ಲ ನಗೆದಾಡುತ್ತಿದ್ದರು. *ಇದು ಹೆಂಗಸರ ಕೆಲಸವಲ್ಲ. ಗಿಡ ಬೆಳೆಸುವದಕ್ಕೆ ನುರಿತವರಿಗೆ ಶಕ್ಯ.. ಉಳಿದವರಿಗಲ್ಲ.* ಈ ರೀತಿಯಾಗಿ ಮನಸ್ಸಿಗೆ ಬಂದಂತೆ ಹರಟೆ ಕೊಚ್ಚುತ್ತಿದ್ದರು.



ಆದರೆ ವಂಗಾರಿ ಹಿಂಜರಿಯಲಿಲ್ಲ. ಒಂದು ವೇಳೆ ನೆಟ್ಟ ಸಸಿ ಮೂರು ತಿಂಗಳಿಗಿಂತ ಹೆಚ್ಚು ದಿನ ಬಾಡದೆ ಇದ್ದರೆ ಸಸಿ ನೆಟ್ಟ ಹೆಣ್ಮಕ್ಕಳಿಗೆ ಪ್ರತಿ ಸಸಿಗಾಗಿ ಒಂದಿಷ್ಟು ಹಣವನ್ನು ವಂಗಾರಿ ಕೊಡುತ್ತಿದ್ದಳು.  ಇದು ಅವಳಿಗೆ ನಗದಾಗಿ ಸಿಕ್ಕ ಮೊದಲನೆ ಸಂಬಳವಿರಬಹುದು.



ವಂಗಾರಿಯ ಹಳ್ಳಿ ಮತ್ತೊಮ್ಮೆ ಮರಗಳಿಂದ ಹಚ್ಚು ಹಸುರಾಯಿತು. ಈ ಸುದ್ದಿ ಗಾಳಿಯಂತೆ ಎಲ್ಲ ಕಡೆಗೂ ಹಬ್ಬಿತು.



ಕೆಲವೇ ದಿನಗಳಲ್ಲಿ ಕೆನಿಯಾದ ಉಳಿದ ಹಳ್ಳಿ ಹಾಗು ಪಟ್ಟಣಗಳಲ್ಲಿಯ ಹೆಣ್ಮಕ್ಕಳೆಲ್ಲ ಉದ್ದ ಉದ್ದ ಸಾಲುಗಳಲ್ಲಿ ಸಸಿಗಳನ್ನು ನೆಟ್ಟರು.



ಆದರೆ ಮರಗಳನ್ನು ಕಡಿಯುವ ಕೆಲಸ ಇನ್ನೂ ನಿಂತಿರಲಿಲ್ಲ.



ವಂಗಾರಿ ಇನ್ನೂ ಕಡೆಯದೆ ಉಳಿದ ಮರಗಳನ್ನು ರಕ್ಷಿಸುವದಕ್ಕಾಗಿ ಹೋರಾಟಕ್ಕೆ ಇಳಿದಳು. *ನಮಗೆ ಕಟ್ಟಡಗಳು ಬೇಕಿಲ್ಲ. ಗಿಡ ಮರಗಳಿಂದ ದಟ್ಟವಾಗಿ ಬೆಳೆದ ಉದ್ಯಾನ– ತೋಟಗಳು ಬೇಕು.*



ಶಾಸನದಲ್ಲಿ ಕೆಲಸ ಮಾಡುವ  ಕಾರ್ಮಿಕರಿಗೆ ವಂಗಾರಿಯ ಈ ಹೋರಾಟ ಸರಿಬಂದಿರಲಿಲ್ಲ. ಅವಳು ಅವರ ಕೆಲಸಕ್ಕೆ ತಡೆ ಉಂಟು ಮಾಡಿದಳೆಂದು ಅವಳಿಗೆ ಹೊಡೆ-ಬಡೆದು ಜೈಲಿನಲ್ಲಿ ಹಾಕಿದರು.



ಆದರೆ ಅವಳು ತನ್ನ ವಿಧಾನಕ್ಕೆ ಅಂಟಿಕೊಂಡಿದ್ದಳು.

*ನಿಜವು ಯಾವಾಗಲೂ ನಿಜವೇ. ಅದನ್ನು ನೀನೇ ಒಬ್ಬ ಳೇ ನುಡಿದರೂ ಪರಿವೆ ಇಲ್ಲ.*



ಆದರೆ ಈ ಹೋರಾಟದಲ್ಲಿ ಅವಳು ಒಬ್ಬಳೇ ಇರಲಿಲ್ಲ. ವ್ವಿಕ್ಟೋರಿಯಾ ಸರೋವರದಲ್ಲಿಯ ನೀರಿನಲ್ಲಿ ಏಳುತ್ತಿರುವ ತರಂಗಗಳಂತೆ ಈ ಗಿಡ-ಮರಗಳ ಸುದ್ದಿ ಇಡೀ ಆಫ್ರಿಕೆ ತುಂಬ  ಹರಡಿತು.



ಈ ಸುದ್ದಿ ಸಾವಿರಾರು ಹೆಣ್ಮಕ್ಕಳವರೆಗೆ ತಲುಪಿತು. ಈ ಹೆಣ್ಮಕ್ಕಳು ಮೈಲುದ್ದದ ಸಾಲುಗಳಲ್ಲಿ ಸಸಿಗಳನ್ನು ನೆಡತೊಡಗಿದರು. ಸಸಿಗಳು ಬೆಳೆದು ಗಿಡವಾದವು, ಮರವಾದವು. ಭೂಮಿ ಮತ್ತೇ ಹಚ್ಚು ಹಸಿರಾಯಿತು.



ಕೆನಿಯಾದಲ್ಲಿಯ ನೆಲವೆಲ್ಲ  ಮತ್ತೊಮ್ಮೆ ಹಸಿರಾಯಿತು.



ಈಗ ಹಳ್ಳಿಯಲ್ಲಿಯ ಹೆಂಗಸರಿಗೆ ಉರುವಲಿಗಾಗಿ  ದೂರ ದೂರವಾದ ಅಡವಿಗೆ ನಡೆಯುತ್ತ ಬೆನ್ನು ಬಾಗಿಸಿ ಹೋಗಬೇಕಿಲ್ಲ.  ಅವರ ಬೆನ್ನು ನೋವು ಕೂಡ ಮಾಯವಾಯಿತು. ಹಕ್ಕಿಗಳೆಲ್ಲ ಮತ್ತೇ ಹಿಂತಿರುಗಿ ಬಂದವು.



ಈಗ ನೆಲ ಬರಡಾಗಿರಲಿಲ್ಲ. ಕಬ್ಬು, ಗೆಣಸು ಮತ್ತು ಗೋವಿನ ಜೋಳದ ಬೆಳೆಯನ್ನು ದೊಡ್ಡ ಪ್ರಮಾಣದಲ್ಲಿ ಕೊಡುವಷ್ಟು ಈ ಕೆಂಪು ಮಣ್ಣು ಹದಗೊಂಡಿತ್ತು.



ವಂಗಾರಿಯ ಗಿಡ-ಮರಗಳ ಮತ್ತು ಮರಗಳನ್ನು ನೆಡುವ ಅವಳ ಹೆಣ್ಮಕ್ಕಳ ಪಡೆಯ ಸುದ್ದಿ ಜಗತ್ತಿಗೆ ಗೊತ್ತಾಯಿತು.



ವಂಗಾರಿ ಇಡೀ ಆಫ್ರಿಕಾ ಖಂಡವನ್ನೇ  ಹಚ್ಚು ಹಸಿರಾಗಿ ಮಾಡಿದ್ದಳು.



ಇಂದು ನಾವು ಕೆನಿಯಾದಲ್ಲಿಯ ಪರ್ವತದ ತುತ್ತ ತುದಿಯಿಂದ ಕೆಳಗೆ ನೋಡಿದರೆ ಲಕ್ಷಗಟ್ಟಲೇ ಗಿಡ ಮರಗಳು ಗಾಳಿಯಲ್ಲಿ ತೇಲುತ್ತಿರುವಂತೆ ಕಾಣುವವು.

ಜನ ನೀರಿಗಾಗಿ, ಅನ್ನಕ್ಕಾಗಿ ಹೋರಾಟ ನಡೆಸುತ್ತಾರೆ....ನಾವು ಮಾತ್ರ ಆಶಾದಾಯಕ ಜೀವನಕ್ಕಾಗಿ ಗಿಡಗಳ ಬೀಜವನ್ನು ನೆಟ್ಟುತ್ತಿದ್ದೇವೆ.

- ವಂಗಾರಿ ಮಥಾಯಿ

